ಡಾ॥ ಚೆನ್ನಕ್ಕ ಪಾವಟೆ

# ಬಾಸವೂರು ಖಚರ ಮನೆತನದ ಮತಾಂತರ

ಕಲ್ಯಾಣದ ಚಾಲುಕ್ಯರ ಮಹಾಮಂಡಳೇಶ್ವರರಲ್ಲಿ ಬಾಸವೂರಿನ ನೂರನಾಲ್ವತ್ತು ವಿಭಾಗದ ಅಧಿಕಾರವನ್ನು ನಿರ್ವಹಿಸಿದ ಖಚರ ಮನೆತನವೂ ಒಂದು. ಸುಮಾರು ಇನ್ನೂರು ವರ್ಷಗಳವರೆಗೆ ಆಳ್ವಿಕೆಯಲ್ಲಿದ್ದ ಈ ಮನೆತನ ಸಾಂಸ್ಕೃತಿಕ, ಸಮಾಜೋ ಧಾರ್ಮಿಕ ಕಾರ್ಯಪ್ರವೃತ್ತಿಯಿಂದ ಪ್ರಸಿದ್ಧವಾದುದು. ಬಾಸವೂರು ನೂರನಾಲ್ವತ್ತರ ಮನ್ನೆಯದ ಅಧಿಕಾರಿಗಳಾಗಿದ್ದ ಇವರು ಕಾಲಾಂತರದಲ್ಲಿ ಮಹಾಮಂಡಳೇಶ್ವರ ಹುದ್ದೆ ನಿರ್ವಹಿಸಿದ್ದು ತಿಳಿದು ಬರುತ್ತದೆ. ಬಂಕಾಪುರದ ಕ್ರಿ.ಶ. 1090ರ ಶಾಸನವೊಂದು 'ಪಾನುಂಗಲ್ಲ ಯ್ನೂಱಱ' ಮಾಂಡಲಿಕತ್ವವೂ ಕೆಲಕಾಲ ಈ ಮನೆತನಕ್ಕೆ ಸಂಬಂಧಿಸಿತ್ತು ಎಂದು ತಿಳಿಸಿದೆ. ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ 'ಚಂದಲದೇವಿಯರ ಗಂಧವಾರಣ ತ್ರಿಭುವನಮಲ್ಲದೇವ ಪಾದಸಳ್ಚರಣ ಗುಣಾಭರಣ' ಎಂದು ಖ್ಯಾತನಾಗಿದ್ದಾನೆ ಈ ಮನೆತನದ ಕಲಿಯಮರಸ ಹೀಗೆ ರಾಜಕೀಯವಾಗಿ ಪ್ರಸಿದ್ಧಿ ಪಡೆದಿದ್ದ ಈ ಮನೆತನದಲ್ಲಿ ಜರುಗಿದ ಮತಾಂತರ ಪ್ರಕ್ರಿಯೆ ತೀವ್ರ ಗಮನ ಸೆಳೆಯು ವಂತಾಗಿದೆ.

ಖಚರ ಮನೆತದ ಮೂಲ ಪ್ರದೇಶ ಬಾಸವೂರು. (ಪಾವರಿ) ಹಾವೇರಿ, (ದೆಯ್ಯದ ಪೊಸವೂರು) ದೇವಿ ಹೊಸೂರು, (ಚೆಂಗಾಪುರ) ಸಂಗೂರು, ಕೋಳೂರು (ಮಲ್ಲವುರ) ಮಲ್ಲೂರು, (ಕಲ್ಕೆಱೆ) ಕಲಕೇರಿ, (ತಮ್ಮುಗೆ) ಕೋಣನ ತಂಬುಗೆ, (ಪೊಮ್ಮರಡಿ), ಹೊಮ್ಮರಡಿ (ಕಬ್ಬೂರು) ಕಬ್ಬೂರು, (ಕುಳುವನೂರು) ಕುಳೇನೂರು, (ದೇವಂಗೇರಿ) ದೇವಗಿರಿ, ಹಿರೇಬಾಸೂರು, ಚಿಕ್ಕಬಾಸೂರುಗಳು ಇವರ ಆಳ್ವಿಕೆಗೆ ಸಂಬಂಧಿಸಿದ ಪ್ರದೇಶಗಳು. ಈ ಮನೆತನದಲ್ಲಿ ಮುಖ್ಯವಾಗಿ ಕಲಿಯಮರಸ, ನಲ್ಲಿಯುಮರಸ, ರಾಜಾದಿತ್ಯ, ಜೋಯಿದೇವರಸ, ಹೆಮ್ಮಾಡಿಯರಸ, ಮಾಚಿಯರಸ, ಮಲ್ಲಿದೇವರಸ ಮುಂತಾದವರು ಆಳ್ವಿಕೆ ನಡೆಸಿದುದು ತಿಳಿದು ಬರುತ್ತದೆ. ಈ ಮನೆತನದ ಕೆಲವು ಅರಸರ ಬಿರುದಾವಳಿಗಳಲ್ಲಿ ಕಂಡು ಬರುವ 'ಪದ್ಮಾವತಿ ದೇವೀಲಬ್ಧವರ ಪ್ರಸಾದರು' ಎಂಬುದು ಇವರ ಜೈನತ್ವವನ್ನು ಸ್ಪಷ್ಟಪಡಿಸುತ್ತದೆ.

ಜೈನಧರ್ಮವು ಈ ಕಾಲದ ಸನ್ನಿವೇಶಕ್ಕನುಗುಣವಾಗಿ ಇತರ ಧರ್ಮಗಳೊಡನೆ ಪ್ರತಿಸ್ಪರ್ಧಿಸಿ ಬದುಕಬೇಕಿತ್ತು. ಈ ಸ್ಪರ್ಧೆಯ ವಿವರಗಳು ನಮಗೆ ತಿಳಿದುಬರುವದಿಲ್ಲವಾದರೂ ಅದರ ಕುರುಹುಗಳು ಅಲ್ಲಲ್ಲಿ ದೊರೆಯುತ್ತವೆ. ಕಾಳಾಮುಖ ಗುರುಗಳು ಮಹಾವಿದ್ವಾಂಸರಾದ್ದರಿಂದ ಪ್ರತಿಪಕ್ಷದವರನ್ನು ಸೋಲಿಸಿ 'ಪರವಾದಿ ಮದಮರ್ದನ', 'ಕಾಳಾಮುಖ ಸಮಯ ಸಮುದ್ಧರಣ', 'ಸಮಯಸಂರಕ್ಷಣೈಕ ದಕ್ಷ' ಮುಂತಾದ ಬಿರುದಗಳನ್ನು ಧರಿಸಿದ್ದು ತಿಳಿದುಬರುತ್ತದೆ. ಇವರ ಪ್ರಭಾವಕ್ಕೆ ಸಿಕ್ಕು ಮತಾಂತರಗೊಂಡು ಗಮನ ಸೆಳೆದ ಮನೆತನ ಭಾಸವೂರು ಖಚರ ಮನೆತನದ್ದು.

ಜೀಮೂತವಾಹನಾನ್ವಯದ ಖಚರವಂಶದ 'ರಾಜಾದಿತ್ಯನ ಸಿಂಗ'ನೆಂಬ ಬಿರುದು ಹೊತ್ತ ಕಲಿಯಮರಸನು ತನ್ನನ್ನು 'ಪದ್ಮಾವತಿ ವರಲಬ್ಧ ಪ್ರಸಾದ ಜಿನಪಾದ ಪಂಕಜ ರಜಃಪುಂಜ ಪಿಂಜರಿತಗಾತ್ರ'ನೆಂದು ಕರೆದು ಕೊಂಡಿರುವನು. ಈ ಕಲಿಯಮರಸ ಬಾಸವೂರು ನೂರ ನಾಲ್ವತ್ತರ ಮನ್ನೆಯದ ಅರಸುತನಗೈಯುತ್ತಿರುವ ಸಂದರ್ಭದಲ್ಲಿ 'ಮಾಹೇಶ್ವರದೀಕ್ಷೆಯಂ ತನಗೆ ಮಾಡಿಸಿಕೊಂಡು' ಸಮಸ್ತ ದೇವದೇವೇಶ್ವರ ಕಂಕಾಳೇಶ್ವರ ಮಹಾಮಹಿಮಂಗೆ ನಿವೇದ್ಯ

* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦ ೦೦೩.

ಪೂಜೆಗೆ ದತ್ತಿ ಬಿಟ್ಟಿರುವನು. ಕಲ್ಯಾಣಿ ಚಾಲುಕ್ಯ ಅರಸ ಒಂದನೆಯ ಸೋಮೇಶ್ವರನ ಕ್ರಿ. ಶ. ೧೦೪೫ರ ಶಾಸನದಲ್ಲಿ ಕಲಿಯಮರಸ ಬಾಸವೂರು ನೂರನಾಲ್ವತ್ತು ಆಳುವಾಗ ರಾಜಗುರುದೇವರೊಂದಿಗೆ ಕೋಳೂರಿನಲ್ಲಿ ತನ್ನ ಹೆಸರಿನ ಕಲಿಯುಮೇಶ್ವರ ದೇವಸ್ಥಾನ ಕಟ್ಟಿಸಿ ಆ ದೇವರ ನಂದಾದೀವಿಗೆಗೆ ಮೂವತ್ತು ಪರಿಸೂತ್ರದ ಮನೆಗಳನ್ನು ದಾನವಾಗಿ ಕೊಟ್ಟಿರುವನು ಬಂಕಾಪುರದ 'ಇಂದ್ರೇಶ್ವರದೇವರ್ಗಾಳ್ವ, ಪನ್ನೆರಡು ಬಾಡ'ಗಳಲ್ಲಿ ಒಂದಾದ ಕೋಳೂರು ಬಾಸವೂರು ನೂರನಾಲ್ವತ್ತರ ಮನ್ನೆಯದ ಗ್ರಾಮ. ರಾಜಗುರು ದೇವರು ಇಂದ್ರೇಶ್ವರದ ಆಚಾರ್ಯರೆನಿಸಿದ್ದರು. ಚಾಲುಕ್ಯ ಭುವನೈಕಮಲ್ಲನ ರಾಜಗುರುವಾಗಿದ್ದ ರಾಜಗುರು ದೇವರದು ಬಹುದೊಡ್ಡ ಹೆಸರು.

'ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಪ್ರಾಣಾಯಾಮ ಪ್ರತ್ಯಾಹಾರ ಜಪಸಮಾಧಿ ಸಂಪನ್ನರ್ ಈಶ್ವರಪಾದ ಕಮಲಬೃಂಗ ಸಾಹಸೋತ್ತುಂಗಾಶ್ರೀತ ಜನಕಲ್ಪ ವೃಕ್ಷ ಶರಣಾಗತಸುರಕ್ಷ ನುಡಿದಂತೆ ಮಾರ್ಪ, ಕುರೆ ಕೂರ್ಪಂ ಪ್ರತಿಪನ್ನ ಮೇರುವೇಕಾಂಗ ವೀರ ಅಸಂದುಧೀರಂ ವೀರಾವತಾರಂ ವೀರಚೂಡಾಮಣಿ, ಗೋತ್ರಚಿಂತಾಮಣಿ, ರೊಡ್ಡಕೈವಾರಂ ಶೈವಪ್ರಾಕಾರಂ ಸಾರ ಪರಿಪರಿಣತ ನಿಸ್ಸಂಕ ವೈರಿಂಬ್ರಂದಕ ಸಾರಸಂಧಾನ ಬಾಣಶಿಕ್ಷಾಗುರು ಕಲಿಯುಗ ದ್ರೋಣಾಚಾರ್ಯ ಸರ್ವಶಸ್ತ್ರಶಾಸ್ತ್ರವಿಶಾರದಂ ನಾರಾಚ ಪರಶುರಾಮ ಗಿರಿದುರ್ಗಭಂಜನಾಂಜನೇಯ ತ್ರೈಲೋಕ್ಯ ರಾಮಜನಂ ಕಟಕಮಾಭೀಸಂ ಕೊಂಕಣ ರಕ್ಷಾಲಂ ಕಡಂಬಾನ್ವಯ ಸಮುದ್ಧರಣ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್' ಇದು ರಾಜಗುರು ವರುಣಶಿವಪಂಡಿತರ ಗೌರವಪೂರ್ಣ ವ್ಯಕ್ತಿತ್ವದ ಚೌಕಟ್ಟು.

ಇವರು ಇಂದ್ರೇಶ್ವರದೇವರಿಗೆ ಬಿಟ್ಟ ಹನ್ನೆರಡು ಹಳ್ಳಿಗಳ ಆಡಳಿತ ಜವಾಬ್ದಾರಿ ನೋಡಿಕೊಳ್ಳುತ್ತಿದ್ದರು. ಈ ಕಲಿಯ ಮರಸ ರಾಜಗುರುದೇವರೊಂದಿಗೆ ಕೋಳೂರಿನ ಕಲಿದೇ ವೇಶ್ವರ ದೇಗುಲಕ್ಕೆ ಭೂದಾನ ನೀಡಿದ ಸಂದರ್ಭ, ಮೂಲತಃ ಜೈನಮತೀಯನಾದ ಕಲಿಯಮರಸ ರಾಜಗುರು ವರಣಶಿವಪಂಡಿತರಿಂದ ಮತಾಂತರಗೊಂಡಂತೆ ಕಾಣುತ್ತದೆ. ನಂತರ ಕೋಳೂರು ಕಲಿದೇವೇಶ್ವರದೇಗುಲದ ಆಚಾರ್ಯ ವಾಮರಾಸಿದೇವರ ಶಿಷ್ಯ ಮಲ್ಲಿಕಾರ್ಜುನ ಭಟ್ಟಾರಕರ ಕಾಲು ತೊಳೆದು ಹತ್ತು ಮತ್ತರು ಭೂಮಿಯನ್ನು ಕೊಟ್ಟಿರುವನು.

ಮಹಾಮಂಡಳೇಶ್ವರ ಕಲಿಯಮರಸ ಮತ್ತು ಲಚ್ಚಲ ದೇವಿಯರ ಮಗ ಹೆಮ್ಮಾಡಿಯರಸನ ಉಲ್ಲೇಖ ದೇವಗಿರಿ ಶಾಸನದಲ್ಲಿ ಬರುತ್ತದೆ. ಚಕ್ರವರ್ತಿ ವಿಕ್ರಮಾದಿತ್ಯನ ಮಹಾಸಾಮಂತಾಧಿಪತಿ ಮನೆವೆರ್ಗಡೆ ಈಶ್ವರಯ್ಯ ದಂಡನಾಯಕರು ಬನವಾಸಿ ಪನ್ನಿರ್ಚಾಸಿರ ಬೆಳ್ವೊಲ ಮೂನ್ನೂರು ಪುಲಿಗೆರೆ ಮೂನ್ನೂರನ್ನು ಆಳುತ್ತಿರುವಾಗ ಈ ಖಚರ ಮನೆತನದ ಹೆಮ್ಮಾಡಿಯರಸನು ಬಾಸವೂರು ನೂರನಾಲ್ವತ್ತನ್ನು ಆಳುತ್ತಿದ್ದನು.

ಈತನು ಜೀಮೂತವಾಹನಾನ್ವಯ ಪ್ರಸೂತನೆಂದು ಹೇಳಿಕೊಂಡಿರುವುದರಿಂದ ಖಚರವಂಶದವನೆಂಬುದು ಸ್ಪಷ್ಟ. ಬನ್ದುಜನ ಕಮಳಿನೀ ರಾಜಹಂಸ, ಖಚರವಂಸೋತ್ತಮ ಪದ್ಮಾವತೀಲಬ್ಧವರ ಪ್ರಸಾದಂ, ತ್ಯಾಗ ವಿನೋದಂ, ಮನ್ನೆಯ ಮದನಿವಾರಣ ಮೊದಲಾದ ಪ್ರಶಸ್ತಿಗಳನ್ನು ಹೊಂದಿದ್ದನು. ಈತನು ಚಾಲುಕ್ಯ ವಿಕ್ರಮ ವರ್ಷದ ೪೬ ನೆಯ ಪ್ಲವ ಸಂವತ್ಸರ ಪೌಶ್ಯಶುದ್ಧ ಪುಣ್ಯಮಿ ಆದಿತ್ಯವಾರ 'ಮಾಹೇಶ್ವರ ದೀಕ್ಷೆ' ತೆಗೆದುಕೊಂಡು ತ್ರಿಭುವನೇಶ್ವರದೇವರ ನೈವೇದ್ಯಕ್ಕಾಗಿ ದೇವಗಿರಿಯಲ್ಲಿ ತ್ರಿಭುವನಪಂಡಿತರ ಪಾದ ತೊಳೆದು ಧಾರಾಪೂರ್ವಕ ಭೂಮಿದಾನ ಮಾಡಿರುವನು.

ಕರ್ನಾಟಕದಲ್ಲಿ ಕಾಪಾಲಿಕರಿಂದ ಬಂದಿರಬಹುದಾದ ಭೈರವಾರಾಧನೆ ಈ ಮತಾಂತರಗೊಂಡು ಬಾಸವೂರ ಖಚರಮನೆತನದ ಮೇಲೆ ಪ್ರಭಾವ ಬೀರಿದೆ. ಹೆಮ್ಮಾಡಿಯರಸ ಮತಾಂತರಗೊಂಡ ನಂತರ ಭೈರವದೇವರಿಗೆ ದತ್ತಿಕೊಟ್ಟ ದಾಖಲೆ ಇದೇ ಕೋಳೂರಿನ ಶಾಸನದಲ್ಲಿದೆ.

ಖಚರಮನೆತನದ ಕಲಿಯಮರಸ, ಹೆಮ್ಮಾಡಿಯರಸರ ಶೈವಧರ್ಮ ಮತಾಂತರ ಈ ಮನೆತನದಲ್ಲಿಯ ಬಹಳ ದೊಡ್ಡತಿರುವು. ಅಂದಿನ ಕಾಲದಲ್ಲಿ ಕಾಳಾಮುಖ ಶೈವರ ಉದಾರ ಧೋರಣೆ ಈ ಮತಾಂತರಕ್ಕೆ ಹೆಚ್ಚು ಪ್ರೋತ್ಸಾಹ ವಿತ್ತಂತಿದೆ. ಇಲ್ಲಿ ಗಮನಿಸಬೇಕಾದ ಒಂದಂಶ ಮನೆಯಲ್ಲಿ ಹಿರಿಯರೊಬ್ಬರು ಮತಾಂತರ ಮಾಡಿದರೆ ಅದು ಮನೆತನದ ಎಲ್ಲರಿಗೂ ಅನ್ವಯಿಸುವ ವಾಡಿಕೆ. ಆದರೆ ಇಲ್ಲಿ ಕಲಿಯಮರಸ ಮಾಹೇಶ್ವರ ದೀಕ್ಷೆಯನ್ನು 'ತನಗೆ ಮಾಡಿಸಿಕೊಂಡುದು' ಅಂತೆಯೇ ಹೆಮ್ಮಾಡಿಯರಸ ಮಾಹೇಶ್ವರ ದೀಕ್ಷೆಯನ್ನ 'ಕೆಯ್‌ಕೊಂಡುದು', ವೈಯಕ್ತಿಕ ಮತಾಂತರಕ್ಕೆ ಸೂಚನೆ ಯೆನಿಸಿದೆ.

ಒಬ್ಬ ಮಂಡಲೇಶ್ವರ ಒಂದು ಧರ್ಮವನ್ನು ಬಿಟ್ಟು ಮತ್ತೊಂದು ಧರ್ಮವನ್ನು ಅಪ್ಪಿದರೆ ಅವನ ಆಳ್ವಿಕೆಯಲ್ಲಿರುವ ಜನರ ಮೇಲೆ ಅದು ಬೀರುವ ಪ್ರಭಾವವನ್ನು ಊಹಿಸಿಕೊಳ್ಳ ಬಹುದು. ಜೈನಧರ್ಮ ಮತ್ತು ಶೈವಧರ್ಮಗಳ ಸ್ಪರ್ಧೆಯ ಈ ಕಾಲದಲ್ಲಿ ಪರಸ್ಪರ ದೇವಾಲಯ ನಾಶದ ಉಲ್ಲೇಖಗಳು ಕಾವ್ಯ ಶಾಸನಗಳಲ್ಲಿ ನಮಗೆ ಸಿಗುತ್ತವೆ. ಆದರೆ ಮತಾಂತರ ಗೊಂಡ ಉಲ್ಲೇಖ ಶಾಸನಗಳಲ್ಲಿ ಸಿಗುವುದು ಈ ಖಚರ ಮನೆತನಕ್ಕೆ ಸಂಬಂಧಪಟ್ಟ ಮತಾಂತರ ಮಾತ್ರವೆಂಬುದು ಗಮನಿಸಬೇಕಾದ ಅಂಶವಾಗಿದೆ.

O